ಡಾ|| ಜೆ.ವಿ. ಗಾಯತ್ರಿ*

# ದಲಿತರ ಉದ್ಧಾರಕ್ಕಾಗಿ ದುಡಿದ ಗೋವಿಂದಾಚಾರ್ಯಸ್ವಾಮಿ

ಮೈಸೂರು ಸಂಸ್ಥಾನದಲ್ಲಿ ಜನತೆಯ ರಾಜಕೀಯ ಜಾಗೃತಿಗೆ ಹಲವಾರು ಚಳುವಳಿಗಳು ಪ್ರೇರಣೆಯಾದವು. ರಾಷ್ಟ್ರ ಪ್ರೇಮದ ಭಾವನೆಗಳನ್ನು ಬೆಳಸಿಕೊಂಡಿದ್ದ ಅನೇಕ ಮಹನೀಯರು ಈ ಚಳುವಳಿಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಹರಿಜನರ ಉದ್ಧಾರಕ್ಕಾಗಿ ಮಹಾತ್ಮಾ ಗಾಂಧೀಜಿಯವರು ಮೈಸೂರು ಸಂಸ್ಥಾನದಲ್ಲಿ ಕೈಗೊಂಡ ಪ್ರವಾಸಗಳಿಂದ ಪ್ರಭಾವಿತರಾದ ಅನೇಕರು ೧೯೩೦ರ ದಶಕದಲ್ಲಿ ಹರಿಜನರ ಅಭ್ಯುದಯಕ್ಕಾಗಿ ಪ್ರಗತಿದಾಯಕ ಪ್ರಯತ್ನಗಳನ್ನು ನಡೆಸಿದರು.

ಮೈಸೂರು ಜಿಲ್ಲೆಯಲ್ಲಿ ಹರಿಜನೋದ್ಧಾರಕ್ಕಾಗಿ ಸಕ್ರಿಯವಾಗಿ ಶ್ರಮಿಸಿದ ಪ್ರಮುಖರೆಂದರೆ ಎಂ. ವೆಂಕಟಕೃಷ್ಣಯ್ಯ, ತಗಡೂರು ರಾಮಚಂದ್ರರಾಯರು, ಆರ್. ಗೋಪಾಲಸ್ವಾಮಿ ಅಯ್ಯರ್, ಎಂ. ಎನ್. ಜೋಯಿಸ್ ಮತ್ತು ಗೋವಿಂದಾಚಾರ್ಯಸ್ವಾಮಿಯವರು. ಹರಿಜನರಿಗೆ ಆರೋಗ್ಯದ ಮಹತ್ವದ ಬಗ್ಗೆ ತಿಳುವಳಿಕೆ ನೀಡುವುದು ಶಾಲೆಗಳಿಗೆ ಮತ್ತು ದೇವಸ್ಥಾನಗಳಿಗೆ ಪ್ರವೇಶಾವಕಾಶ ಒದಗಿಸುವುದು, ಕ್ರೈಸ್ತ ಮತಾಂತರ ವಿರೋಧ ಮುಂತಾದ ಚಟುವಟಿಕೆಗಳನ್ನು ಇವರು ಹಮ್ಮಿಕೊಂಡರು. ಕ್ರೈಸ್ತ ಪಾದ್ರಿಗಳ ಒತ್ತಾಯಕ್ಕೆ ಒಳಗಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದ ಮೈಸೂರು ಜಿಲ್ಲೆಯ ಅನೇಕ ದಲಿತ ಹಿಂದೂಗಳ 'ಶುದ್ಧಿ' ಕಾರ್ಯವನ್ನು ತಗಡೂರು ರಾಮಚಂದ್ರರಾಯರು ಕೈಗೊಂಡರು. ಈ ಕಾರ್ಯಗಳಲ್ಲಿ ರಾಮಚಂದ್ರರಾಯರಿಗೆ ಬೆಂಬಲಿಗರಾಗಿ ನಿಂತು ಅತ್ಯಂತ ಉತ್ಸಾಹದಿಂದ ದಲಿತ ಹಿಂದೂಗಳ 'ಶುದ್ಧಿ' ಮತ್ತು ಮುದ್ರಾಧಾರಣೆ ನಡೆಸಿಕೊಟ್ಟವರು ಮೈಸೂರು ನಗರದ ನಿವಾಸಿಗಳಾದ ಗೋವಿಂದಾಚಾರ್ಯಸ್ವಾಮಿಯವರು.

ಆಲ್ಕೊಂಡವಿಲ್ಲಿ ಗೋವಿಂದಾಚಾರ್ಯರು ೧೮೫೭ರಲ್ಲಿ ಜನಿಸಿದರು. ಬೆಂಗಳೂರಿನ 'ಸ್ಕೂಲ್ ಆಫ್ ಎಂಜಿನಿಯರಿಂಗ್ ಮತ್ತು ನ್ಯಾಚುರಲ್ ಸೈನ್ಸ್'ನಲ್ಲಿ ೧೮೭೮ರಲ್ಲಿ ಪ್ರಥಮ ರ್ಯಾಂಕ್‌ಗಳಿಸಿ ಉತ್ತೀರ್ಣರಾದರು, ನಂತರ ಮೈಸೂರು ಸರ್ಕಾರದ ಮರಾಮತ್ ಇಲಾಖೆಯಲ್ಲಿ ಎಂಜಿನಿಯರ್ ಆಗಿ ನೇಮಕ ಹೊಂದಿದರು. ಇವರ ತಂದೆ ಎ. ಶ್ರೀನಿವಾಸ ಅಯ್ಯಂಗಾರ್ಯರು ಮೈಸೂರು ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದರು. ಹಾಗೂ ಮೈಸೂರಿನ ಮಹಾರಾಜರಾಗಿದ್ದ ಹತ್ತನೆಯ ಚಾಮರಾಜೇಂದ್ರ ಒಡೆಯರ್‌ರವರಿಗೆ ಕೆಲವು ಕಾಲ ಇಂಗ್ಲೀಷ್ ಪಾಠ ಹೇಳುತ್ತಿದ್ದು, 'ಅಂಗ್ರೇಜಿ ಅಯ್ಯಂಗಾರ್ ಎಂದೇ ಅರಮನೆಯಲ್ಲಿ ಪರಿಚಿತರಾಗಿದ್ದರು. ಇವರು ತೆಂಗಲೆಪಂಗಡಕ್ಕೆ ಸೇರಿದ ಶ್ರೀವೈಷ್ಣವ ಬ್ರಾಹ್ಮಣರು. ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತದಿಂದ ಪ್ರಭಾವಿತರಾಗಿದ್ದ ಗೋವಿಂದಾಚಾರ್ಯರು ಕೆಲವು ಗ್ರಂಥಗಳನ್ನು ರಚಿಸಿದ್ದಾರೆ. ಇದರಲ್ಲಿ ಪ್ರಮುಖವಾದವು 'ಲೈಫ್ ಆಫ್ ರಾಮಾನುಜ,' 'ಎ ಮೆಟಫಿಸಿಕ್ಸ್ ಆಫ್ ಮಿಸ್ಟಿಸಿಸಮ್,' 'ಹೋಲಿ ಲೈಫ್ ಆಫ್ ದಿ ಆಳ್ವಾರ್ಸ್,' 'ಐಡ್ಸ್ ಆಫ್ ಇಂದ್'

* ೧೬೩೧, ೩ನೇ ಮುಖ್ಯ ರಸ್ತೆ, ೮ನೇ ಅಡ್ಡರಸ್ತೆ, ವಿವೇಕಾನಂದನಗರ, ಮೈಸೂರು-೫೭೦೦೨೩

ಮತ್ತು 'ದಿ ಡಿವೈನ್ ವಿಸ್ಡಮ್ ಆಫ್ ದಿ ದ್ರಾವಿಡಾ ಸೇಂಟ್ಸ್'. ಭೂತದಯಾ ಪ್ರವೃತ್ತಿಯುಳ್ಳ ಈ ಕುಟುಂಬದಲ್ಲಿ ಇವರೊಡನೆ ಇಂತಹ ಕಾರ್ಯಗಳಲ್ಲಿ ಪಾಲ್ಗೊಂಡವರು ಇವರ ಪತ್ನಿ ವೇದನಾಯಕಮ್ಮ. ಆಚಾರ್ಯರ ಸಹೋದರಿ ವೆಂಕಟಕೃಷ್ಣಮ್ಮ ಮತ್ತು ಆಕೆಯ ಪತಿ ಶ್ರೀನಿವಾಸ ಅಯ್ಯಂಗಾರ್ಯರು ಸಹ ಬೆಂಗಳೂರಿನಲ್ಲಿ ಅನಾಥ ಬಾಲಕಿಯರ ಏಳಿಗೆಗಾಗಿ 'ಶ್ರೀನಿವಾಸ ಮಂದಿರಂ ಚಾರಿಟೀಸ್' ಎಂಬ ಸೇವಾ ಸಂಸ್ಥೆಯನ್ನು ಸ್ಥಾಪಿಸಿ ಶ್ರಮಿಸಿದರು.

ಮೈಸೂರು ಜಿಲ್ಲೆಯಲ್ಲಿ ೧೯೩೫ರಲ್ಲಿ ಸಮಾಜ ಸುಧಾರಣೆಯ ಆಂದೋಲನದಲ್ಲಿ ಜರುಗಿದ ಮುಖ್ಯ ಘಟನೆಯೆಂದರೆ 'ಕಣಿಯರು' ಎಂಬ ಜಾತಿಯ ಜನರಿಗೆ ಮುದ್ರಾಧಾರಣೆ ಮಾಡಿ ಉತ್ತಮ ಹಿಂದೂಗಳಾಗಿ ಪರಿವರ್ತಿಸುವ ಕಾರ್ಯ. ಈ ಜನರಿಗೆ ಮುದ್ರಾಧಾರಣೆ ಮಾಡಿ ಇವರ ಸಾಮಾಜಿಕ ಅಭ್ಯುದಯಕ್ಕಾಗಿ ಗೋವಿಂದಾಚಾರ್ಯರು ವಹಿಸಿದ ಶ್ರಮ ಅಪಾರ. ತಿರುಮ ಕೂಡ್ಲು ನರಸೀಪುರದಲ್ಲಿ ಸೆಪ್ಟೆಂಬರ್ ೫, ೧೯೩೫ ರಂದು ಗಾಂಧಿ ಮೈದಾನದಲ್ಲಿ ಜರುಗಿದ ಅಖಿಲ ಕರ್ನಾಟಕ ಕಣಿಯರ ಮಹಾಸಮ್ಮೇಳನದ ಅಧ್ಯಕ್ಷತೆಯನ್ನು ಮೈಸೂರಿನ ಎಂ. ವೆಂಕಟಕೃಷ್ಣಯ್ಯ ವಹಿಸಿದ್ದರು. ಕಣಿಯರ ಜನಾಂಗಕ್ಕೆ ಸಾಮಾಜಿಕನ್ಯಾಯ ದೊರಕಿಸಿ ಕೊಡಲು ಕಾತರರಾಗಿದ್ದ ಮಹನೀಯರಾದ ಎ. ಗೋವಿಂದಾಚಾರ್ಯಸ್ವಾಮಿ, ತಿ. ತಾ. ಶರ್ಮ, ಜಿ.ಆರ್.ಎಸ್. ರಾವ್, ವಿ. ಎಸ್. ಸಂಜೀವರಾವ್, ಪಿ. ಆರ್. ರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಗರಂ ರಂಗಯ್ಯ, ತಗಡೂರು ರಾಮಚಂದ್ರರಾವ್ ಮುಂತಾದವರು ಇಲ್ಲಿ ಸೇರಿದ್ದರು. ಕಣಿಯ ಜನಾಂಗದ ೩೬ ಜನರುಳ್ಳ ಒಂದು ಸಭೆಯನ್ನು ಆಯ್ದು, ಪ್ರತಿ ಸದಸ್ಯನೂ ತನ್ನ ಕ್ಷೇತ್ರದ ಕಣಿಯರ ಅಭಿವೃದ್ಧಿಗೆ ಶ್ರಮಿಸಬೇಕೆಂದು ಮತ್ತು ವರದಿಯನ್ನು ತಗಡೂರು ರಾಮಚಂದ್ರರಾಯರಿಗೆ ಸಲ್ಲಿಸಬೇಕೆಂದು ಇಲ್ಲಿ ನಿರ್ಣಯವಾಯಿತು. ಕಣಿಯರು ಪಡೆದ ಈ ಸಾಮಾಜಿಕ ನ್ಯಾಯವನ್ನು ಜನತೆಯ ಗಮನಕ್ಕೆ ತರಲು ಫೆಬ್ರವರಿ ೧೪, ೧೯೩೬ ರಂದು ಬೆಂಗಳೂರಿನ ಮುಖ್ಯ ಬೀದಿಗಳಲ್ಲಿ ಕಣಿಯರು ಭಜನೆ ಮಾಡಿಕೊಂಡು ಮೆರವಣಿಗೆ ಹೋಗಿ ಗವಿಗಂಗಾಧರೇಶ್ವರಸ್ವಾಮಿ, ಶ್ರೀನಿವಾಸ ಮಂದಿರ ಮುಂತಾದ ದೇವಸ್ಥಾನಗಳಲ್ಲಿ, ತೀರ್ಥ, ಪ್ರಸಾದ ತೆಗೆದುಕೊಳ್ಳುವ ಕಾರ್ಯಕ್ರಮ ಏರ್ಪಟ್ಟಿತು. ಈ ಕಾರ್ಯಕ್ರಮದ ಮುಂದಾಳತ್ವ ವಹಿಸಿದವರು ಗೋವಿದಾಚಾರ್ಯಸ್ವಾಮಿ ಮತ್ತು ಇವರ ಪತ್ನಿ ವೇದನಾಯಕಮ್ಮ. ಬೆಂಗಳೂರಿನಲ್ಲಿ ಕಣಿಯರಿಗೆ ದೊರೆತ ಸ್ಥಾನಮಾನಗಳನ್ನು ಇತರ ಪ್ರದೇಶ ಗಳಲ್ಲಿಯೂ ದೊರಕಿಸಿಕೊಡಬೇಕೆಂದು ಮರುದಿನ ಗಾಂಧಿ ಮೈದಾನದಲ್ಲಿ ನಡೆದ ಸಭೆಯಲ್ಲಿ ತೀರ್ಮಾನವಾಗಿ ಈ ಕಾರ್ಯಕ್ಕಾಗಿ ಗೋವಿಂದಾಚಾರ್ಯಸ್ವಾಮಿ, ಕೆ. ಸಂಪದ್ಗಿರಿರಾವ್, ಸಿಂಗಮ್ಮ, ದೇವುಡು ನರಸಿಂಹಶಾಸ್ತ್ರಿ ನೇಮಿಸಲ್ಪಟ್ಟರು. ನಂತರ ಬೆಂಗಳೂರಿನಲ್ಲಿ ಜುಲೈ ೨೫, ೧೯೩೬ ರಂದು 'ಕಣಿಯರ ಸಂಘ' ಏರ್ಪಟ್ಟು ಆಗಸ್ಟ್ ೧೦, ೧೯೩೬ ರಂದು ಅದು ಸರ್ಕಾರದಲ್ಲಿ ರಿಜಿಸ್ಟರಾಯಿತು.

ಗೋವಿಂದಾಚಾರ್ಯರು ಮೊಟ್ಟಮೊದಲು ೧೯೩೫ ರಲ್ಲಿ ಕೈಗೊಂಡ ಮುದ್ರಾಧಾರಣ ಕಾರ್ಯಕ್ರಮವು ಮೈಸೂರು ಜಿಲ್ಲೆಯ ತಗಡೂರಿನ ಕಿರಗುಂದ ಗ್ರಾಮದಲ್ಲಿ ಸಂತೆಯೊಂದರ ದಿನ ಬೃಹತ್ ಸಮಾರಂಭದೊಂದಿಗೆ ಪ್ರಾರಂಭವಾಯಿತು. ಸುತ್ತಮುತ್ತಲಿನ ೧೨-೧೪ ಗ್ರಾಮಗಳಿಂದ ಮುದ್ರಾಧಾರಣೆಗಾಗಿ ಕಣಿಯರು ಬಂದು ಸೇರಿದ್ದರು. ಸರ್ಕಾರದ ಅಧಿಕಾರಿಗಳಾದ ಡೆಪ್ಯುಟಿ ಕಮಿಷನರ್, ಪೋಲಿಸ್ ಸೂಪರಿಂಟೆಂಡೆಂಟ್ ಮತ್ತಿತರ ಸಿಬ್ಬಂದಿಯ ಬಿಗಿ ಕಾವಲು ಬೇರೆ. ಕ್ರೈಸ್ತ ಪಾದ್ರಿ ಫಾದರ್ ಸಾಡೆಯವರು ಸಹ ಅಂದು ಹಾಜರಿದ್ದರು. ಇಂತಹ ಬಿಗುವಿನ ವಾತಾವರಣದಲ್ಲಿ ಸಮಾರಂಭಕ್ಕೆ ಬಂದಿದ್ದ ಎಲ್ಲಾ ಕಣಿಯರಿಗೂ ಗೋವಿಂದಾಚಾರ್ಯರು ಮುದ್ರಾಧಾರಣೆ ಮಾಡಿಸಿ ನೆರೆದ ಜನಸಮೂಹಕ್ಕೆ ಊಟ ಹಾಕಿಸಿ ಸರ್ಕಾರಿ ಅಧಿಕಾರಿಗಳಿಗೆ ದಿಗ್ಭ್ರಾಂತಿ ಯನ್ನುಂಟು ಮಾಡಿದರು. ಇಲ್ಲಿಂದ ಮುಂದೆ ಚಾಮರಾಜನಗರ, ಯಳಂದೂರು ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಆಚಾರ್ಯರು ಕಣಿಯರ ಮುದ್ರಾಧಾರಣ ಕಾರ್ಯದಲ್ಲಿ ಯಶಸ್ವಿಯಾದರು. ಯಳಂದೂರು ತಾಲ್ಲೂಕಿನಲ್ಲಿ ಆಚಾರ್ಯರಿಗೆ ಆಶ್ರಯ ಕೊಡಬಾರದೆಂಬ ಸರ್ಕಾರಿ ಆಜ್ಞೆ ಜಾರಿಯಲ್ಲಿದ್ದರೂ, ಇವರಿಗೆ ರಾತ್ರಿ ಆಶ್ರಯ ನೀಡಿದ ಶ್ರೀನಿವಾಸಯ್ಯನೆಂಬ ಶ್ಯಾನುಭೋಗರು ಸರ್ಕಾರದ ಕೋಪಕ್ಕೆ ತುತ್ತಾಗಿ

ಕೆಲಸದಿಂದಲೇ ತೆಗೆಯಲ್ಪಟ್ಟರು. ಇದರಿಂದ ಹೆದರಿದ ಕಣಿಯರು ಮುದ್ರಾಧಾರಣೆಗೆ ಬರದೆ ನದಿಯ ದಡದಲ್ಲೇ ಇರುವುದನ್ನು ನೋಡಿದ ಆಚಾರ್ಯರು ಆ ದಡಕ್ಕೆ ಹೋಗಿ ತೋಟವೊಂದರ ಮಧ್ಯೆ ಕುಳಿತು ಮುದ್ರಾಧಾರಣೆಯ ಕಾರ್ಯ ನೆರವೇರಿಸಿದರು.

ಮುಂದೆ ತಿರುಮಕೂಡ್ಲು ನರಸೀಪುರದಲ್ಲಿ ಶ್ರೀಗುಂಜಾ ನರಸಿಂಹಸ್ವಾಮಿ ದೇವಸ್ಥಾನದಲ್ಲಿ ಮೇ ೧೬, ೧೯೩೬ರಂದು ಕಣಿಯರಿಗೆ ತೀರ್ಥ, ಪ್ರಸಾದ ನೀಡುವಂತೆ ಆಗಿದ್ದು ಸಮಾಜ ಸುಧಾರಣೆಯ ಒಂದು ದೊಡ್ಡ ಹಂತ. ಅಂದು ಆಚಾರ್ಯರು ನೆರವೇರಿಸಿದ ಕಣಿಯರ ಮುದ್ರಾಧಾರಣೆ ಮತ್ತು ದೇವಸ್ಥಾನದ ಪ್ರವೇಶಕ್ಕೆ ಪರೋಕ್ಷವಾಗಿ ಬೆಂಬಲ ಸಿಕ್ಕಿದ್ದು, ಮೈಸೂರಿನ ಸಬ್ ಡಿವಿಜನರ್ ಆಫೀಸರ್ ಆಗಿದ್ದ ಶ್ರೀ ವೈಷ್ಣವ ಮತಸ್ಥರಾದ ಅಪ್ಪಣ್ಣಯ್ಯಂಗಾರ್ಯರಿಂದ. ಅಂದು ಅಪ್ಪಣ್ಣಯ್ಯಂಗಾರ್ಯರು ಕಣಿಯರಿಗೆ ತೀರ್ಥ, ಪ್ರಸಾದ ಹಂಚಿದ ನಂತರ ದೇವಸ್ಥಾನದ ಮುಂದೆ ಇದ್ದ ಮೈದಾನದ ಮಂಟಪದಲ್ಲಿ ಕಣಿಯರ ಸತ್ಯಾಗ್ರಹ ೮ ದಿನಗಳ ಕಾಲ ನಡೆಯಿತು. ಅದೇ ಸಮಯದಲ್ಲಿ ಜರುಗಿದ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಹೊಸಕೊಪ್ಪ ಕೃಷ್ಣರಾಯರು, ನೀಲಗಿರಿ ಸಂಜೀವಯ್ಯ, ಬೈಯಣ್ಣ, ಎಂ. ಸಿ. ಅಂಗೇಗೌಡ, ಎಸ್.ಸಿ. ಮಲ್ಲಯ್ಯ ಮುಂತಾದ ಸದಸ್ಯರು ಕಣಿಯರ ಸತ್ಯಾಗ್ರಹ ಮತ್ತು ದೇವಸ್ಥಾನದ ಪ್ರವೇಶ ಕುರಿತು ಚರ್ಚೆ ನಡೆಸಿದರು. ಅನೇಕ ಸದಸ್ಯರು ತಿರುಮಕೂಡ್ಲು ನರಸೀಪುರಕ್ಕೆ ಬಂದು ಸತ್ಯಾಗ್ರಹಿಗಳನ್ನು ಭೇಟಿ ಮಾಡಿ ಸರ್ಕಾರದ ಗಮನ ಸೆಳೆಯುವ ಭರವಸೆ ಕೊಟ್ಟ ಮೇಲೆ ಸತ್ಯಾಗ್ರಹ ನಿಲ್ಲಿಸಲ್ಪಟ್ಟಿತು.

ಗೋವಿಂದಾಚಾರ್ಯರು ಶ್ರೀರಾಮಾನುಜರ ಸಿದ್ಧಾಂತಗಳನ್ನು ಆಚರಣೆಗೆ ತಂದ ಮಹಾನುಭಾವರು. ಮಹಾಪಂಡಿತರಾದ ಇವರಿಗೆ ಶ್ರೀ ಪರಕಾಲಮಠದ ಅಗ್ರ ತೀರ್ಥದ ಮರ್ಯಾದೆ ಇತ್ತು. 'ಕಣಿಯರ ಸಾಮಾಜಿಕ ಸುಧಾರಣೆಯನ್ನು ಕೈಗೆತ್ತಿಕೊಂಡು, ಕಣಿಯರ ನೆಲೆಗಳಿಗೆ ಭೇಟಿಕೊಟ್ಟು, ಅವರಿಗೆ ಮುದ್ರಾಧಾರಣೆ ದೇವಸ್ಥಾನದ ಪ್ರವೇಶಾವಕಾಶ ಮತ್ತು ತೀರ್ಥ, ಪ್ರಸಾದಗಳನ್ನು ವಿನಿಯೋಗಿಸುವ ಕ್ರಾಂತಿಕಾರಿ ಆಂದೋಳನದಲ್ಲಿ ಭಾಗ ವಹಿಸಿ ದುಡಿದ ಕೀರ್ತಿ ಆಚಾರ್ಯರಿಗೆ ಸಲ್ಲುತ್ತದೆ.

ಗೋವಿಂದಾಚಾರ್ಯರ ನಿಧನ(೧೯೩೨)ದ ನಂತರ ದಲಿತರ ಮುದ್ರಾಧಾರಣ ಕಾರ್ಯವನ್ನು ಇವರ ಮೊಮ್ಮಗ ಎಂ. ಯಾಮುನಾಚಾರ್ಯರು ಮುಂದು ವರೆಸಿದರು. ಮೈಸೂರು ವಿಶ್ವವಿದ್ಯಾಲಯದ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಯಾಮುನಾಚಾರ್ಯರು ಗಾಂಧೀಜಿಯವರ ಕೃತಿಗಳನ್ನು ಭಾಷಾಂತರಿಸಿರುವುದಲ್ಲದೆ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳ ಬಗ್ಗೆ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಮೈಸೂರು ನಗರದ ಹಾರ್ಡ್ವಿಕ್ ವೃತ್ತದ ಬಳಿಯಿರುವ ಇವರ ನಿವಾಸಕ್ಕೆ ಆಚಾರ್ಯರಿಂದ ಮುದ್ರಾಧಾರಣೆ ಪಡೆದು ಶ್ರೀ ವೈಷ್ಣವರಾದ ಇವರ ಶಿಷ್ಯರ ವಂಶಸ್ಥರು ಇಂದಿಗೂ ಗೋಕುಲಾಷ್ಟಮಿ ಮತ್ತು ವರಮಹಾಲಕ್ಷ್ಮಿ ಹಬ್ಬಗಳಂದು ಆಗಮಿಸಿ ಆಚಾರ್ಯರ ವಂಶಸ್ಥರಿಂದ ಆಶೀರ್ವಾದ ಪಡೆಯುವ ಪದ್ಧತಿಯಿದೆ.

## ಆಧಾರಗ್ರಂಥಗಳು


'ಕರ್ಮಯೋಗಿ,' ಸಂ. ಎಂ.ಎನ್. ಜೋಯಿಸ್ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಭಾಗ-೨ ಸಂ. ಡಾ|| ಸೂರ್ಯನಾಥಕಾಮತ್



ಈ ಲೇಖನ ಸಿದ್ಧಪಡಿಸಲು ಮಾಹಿತಿ ನೀಡಿ ಸಹಕರಿಸಿದ ದಿವಂಗತ ಎ. ಗೋವಿಂದಚಾರ್ಯಸ್ವಾಮಿಯವರ ಮೊಮ್ಮಗ ಡಾ|| ಎಂ. ಮುತ್ತು ಮತ್ತು ಮೈಸೂರಿನ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಂ. ಎನ್. ಜೋಯಿಸ್‌ರಿಗೆ ಲೇಖಕರ ಕೃತಜ್ಞತೆಗಳು.